# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 576 (626)

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕೆ.ಟಿ ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)

ಉತ್ತರಿಸುವ ದಿನಾಂಕ : 17-12-2021

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಸದಸ್ಯರ ಅವಧಿ ಮುಕ್ತಾಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇವರ ಅವಧಿ ಮುಕ್ತಾಯವಾಗಿ ಎಷ್ಟು ದಿನಗಳಾಗಿವೆ; (ಮಾಹಿತಿ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿರುತ್ತದೆ. 2016-2021ರವರೆಗಿನ ಅವಧಿಗೆ ರಚಿತಗೊಂಡಿದ್ದ, ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯತಿಗಳ ಆಡಳಿತ ಅವಧಿಯು 2021ರ ಏಪ್ರಿಲ್, ಮೇ ಹಾಗೂ ಜೂನ್ ತಿಂಗಳ ವಿವಿಧ ದಿನಾಂಕಗಳಲ್ಲಿ ಮುಕ್ತಾಯಗೊಂಡಿರುತ್ತದೆ. ಈ ಅವಧಿಯು ಸುಮಾರು 8-9 ತಿಂಗಳಾಗಿರುತ್ತದೆ. |
| (ಆ) | ಇವರ ಅವಧಿ ಮುಗಿದು 6 ತಿಂಗಳಾಗಿದ್ದರೂ, ಚುನಾವಣೆಗಳು ನಡೆಯದೆ ಇರಲು ಕಾರಣ ಏನು; | ಕರ್ನಾಟಕ ಗ್ರಾಮ್ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308ಕ್ಕೆ ತಿದ್ದುಪಡಿ ತರಲಾಗಿದ್ದು ಹಾಗೂ ಹೊಸ ಪ್ರಕರಣ 308-ಇ ರಿಂದ 308-ಎಂ ರವರೆಗೆ ಹೊಸ ಪ್ರಕರಣಗಳನ್ನು ಸೇರಿಸಲಾಗಿರುತ್ತದೆ. ಈ ತಿದ್ದುಪಡಿಯಿಂದಾಗಿ ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತಿಗಳ ಚುನಾವಣಾ ಕ್ಷೇತ್ರಗಳ ಸೀಮಾ ನಿರ್ಣಯದ ಬಗ್ಗೆ ವಿವರವಾಗಿ ಪರಿಶೀಲಿಸಿ, ವರದಿಯ ಪ್ರತಿಯನ್ನು ಸಾರ್ವಜನಿಕ ಮಾಹಿತಿಗಾಗಿ ಪ್ರಕಟಿಸಿ ಆಕ್ಷೇಪಣೆಗಳನ್ನು ಸ್ವೀಕರಿಸಿ ಪರಿಶೀಲಿಸಿದ ನಂತರ ಸರ್ಕಾರಕ್ಕೆ ಸೂಕ್ತ ಶಿಫಾರಸ್ಸು ವರದಿಯನ್ನು ಸಲ್ಲಿಸುವಂತೆ ಉಪಬಂಧವನ್ನು ಕಲ್ಪಿಸಲಾಗಿದೆ. ಇದರನ್ವಯ ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗವನ್ನು ರಚಿಸಲಾಗಿರುತ್ತದೆ. ಆಯೋಗವು ಕಾರ್ಯಾರಂಭಗೊಂಡಿದ್ದು, ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತಿಗಳ ಸೀಮಾ ನಿರ್ಣಯವನ್ನು ಪಾರದರ್ಶಕವಾಗಿ ನಿರ್ಧರಿಸಿದ ನಂತರ ಅಧಿಸೂಚಿಸಲಾಗುವುದು ಹಾಗೂ ಚುನಾವಣೆಯನ್ನು ನಡೆಸಲಾಗುವುದು. |

| | | |
|---|---|---|
| (ಇ) | ಇವುಗಳ ಗಡಿ ಪುಂಗಡಣೆಗೆ ಸಮಿತಿಯನ್ನು ರಚಿಸಲಾಗಿದೆಯೇ: (ಸಮಿತಿಯ ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪಂರಾ 319 ಜಿಪಸ 2021, ದಿನಾಂಕ:13-10-2021ರನ್ವಯ ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗವನ್ನು ರಚಿಸಲಾಗಿದೆ. ಆದೇಶದ ಪ್ರತಿ ಲಗತ್ತಿಸಿದೆ. |
| ಈ) | ಸಮಿತಿಯು ವರದಿ ನೀಡುವುದು ಯಾವಾಗ: | ಆಯೋಗವು ಜಿಲ್ಲಾಧಿಕಾರಿಗಳೊಡನೆ ಹಾಗೂ ಅವಶ್ಯವಿರುವ ಕಡೆಗಳಲ್ಲಿ ಸ್ಥಳೀಯವಾಗಿ ಚರ್ಚಿಸಿ, ಚುನಾವಣಾ ಕ್ಷೇತ್ರಗಳ ಗಡಿಗಳನ್ನು ನಿರ್ಧರಿಸುವ ಬಗ್ಗೆ ಆಯೋಗ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಬೇಕಾಗಿರುತ್ತದೆ. ಸಮಿತಿಯ ವರದಿಯು ಬಂದ ಕೂಡಲೇ ಅಗತ್ಯ ಕ್ರಮವಹಿಸಲಾಗುವುದು. |
| ಉ) | ಯಾವ ಕಾಲಮಿತಿಯಲ್ಲಿ ಚುನಾವಣೆಗಳನ್ನು ನಡೆಸಲಾಗುವುದು? (ಮಾಹಿತಿ ನೀಡುವುದು) | ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗವು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದ ನಂತರ ಅದನ್ನು ಸರ್ಕಾರ ಪರಿಶೀಲಿಸಿ ತೀರ್ಮಾನಿಸಲಾಗುವುದು. |

**ಸಂಖ್ಯೆ: ಗ್ರಾಅಪಂರಾ 545 ಜಿಪಸ 2021**

**(ಕೆ.ಎಸ್.ಈಶ್ವರಪ್ಪ)**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗದ ರಚನೆ ಕುರಿತು.

**ಓದಲಾಗಿದೆ:**

ಅಧಿಸೂಚನೆ ಸಂಖ್ಯೆ: ಸಂವ್ಯಶಾ 37 ಶಾಸನ 2021, ದಿನಾಂಕ: 18-09-2021.

**ಪ್ರಸ್ತಾವನೆ :**

ರಾಜ್ಯದ ಗ್ರಾಮ ಪಂಚಾಯತಿಗಳ, ತಾಲ್ಲೂಕು ಪಂಚಾಯತಿಗಳ ಹಾಗೂ ಜಿಲ್ಲಾ ಪಂಚಾಯತಿಗಳ ಚುನಾವಣಾ ಕ್ಷೇತ್ರಗಳ ಸೀಮಾ ನಿರ್ಣಯ, ಚುನಾಯಿತ ಸದಸ್ಯರ ಸಂಖ್ಯೆಯ ನಿರ್ಣಯ, ಮೀಸಲಾತಿ ನಿಗದಿಗೊಳಿಸುವ ಪ್ರಕ್ರಿಯೆಗಳನ್ನು ರಾಜ್ಯ ಚುನಾವಣಾ ಆಯೋಗವು ನಿರ್ವಹಿಸುತ್ತಿದೆ. ಆದರೆ ರಾಜ್ಯ ಪಂಚಾಯತ್ ಸಂಸ್ಥೆಗಳ ಚುನಾವಣಾ ಕ್ಷೇತ್ರಗಳ ಸೀಮಾ ನಿರ್ಣಯದ ಬಗ್ಗೆ ಸೂಕ್ಷ್ಮವಾಗಿ ಪರಿಶೀಲಿಸಿ ಸರ್ಕಾರಕ್ಕೆ ವರದಿ ಸಲ್ಲಿಸಲು ಪ್ರತ್ಯೇಕವಾದ ಕರ್ನಾಟಕ ಪಂಚಾಯತ್ ರಾಜ್ ಕ್ಷೇತ್ರಗಳ ಸೀಮಾ ನಿರ್ಣಯ ಆಯೋಗದ ಮುಖಾಂತರ ನಿರ್ವಹಿಸುವುದು ಸೂಕ್ತವೆಂದು ಭಾವಿಸಿ, ಮೇಲೆ ಓದಲಾದ ದಿನಾಂಕ:18-09-2021ರ ಅಧಿಸೂಚನೆಯನ್ವಯ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308-ಇ ರ ಉಪಬಂಧದನ್ವಯ ಪಂಚಾಯತ್ ರಾಜ್ ಸಂಸ್ಥೆಗಳ ಚುನಾವಣಾ ಕ್ಷೇತ್ರಗಳ ಸೀಮಾ ನಿರ್ಣಯದ ಉದ್ದೇಶಕ್ಕಾಗಿ ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗವನ್ನು ರಚಿಸಲು ತೀರ್ಮಾನಿಸಲಾಗಿರುತ್ತದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪಂರಾ 319 ಜಿಪಸ 2021, ಬೆಂಗಳೂರು, ದಿನಾಂಕ:13-10-2021**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರವು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗವನ್ನು ರಚಿಸಿ ಆದೇಶಿಸಿದೆ.

| | |
|---|---|
| ಸರ್ಕಾರವು ನೇಮಿಸುವ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿ ಅಥವಾ ಅಪರ ಮುಖ್ಯ ಕಾರ್ಯದರ್ಶಿ | ಅಧ್ಯಕ್ಷ |
| ಸರ್ಕಾರವು ನೇಮಿಸುವ ಗ್ರಾಮೀಣಾಭಿವೃದ್ಧಿ, ವಿಕೇಂದ್ರೀಕರಣ ಮತ್ತು ಪಂಚಾಯತ್ ರಾಜ್ ವಿಷಯಗಳಲ್ಲಿ ಅನುಭವ ಹೊಂದಿರುವ ಸರ್ಕಾರದ ನಿವೃತ್ತ ಕಾರ್ಯದರ್ಶಿ ಅಥವಾ ಸರ್ಕಾರದ ಕಾರ್ಯದರ್ಶಿ ದರ್ಜೆಗೆ ತತ್ಸಮಾನವಾದ ದರ್ಜೆಯ ನಿವೃತ್ತ ಅಧಿಕಾರಿ | ಸದಸ್ಯ |
| ಸರ್ಕಾರವು ನಾಮ ನಿರ್ದೇಶಿಸುವ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಲಯದಲ್ಲಿನ ಒಬ್ಬ ತಜ್ಞ | ಸದಸ್ಯ |

| | |
|---|---|
| ಪಂಚಾಯತ್ ರಾಜ್ ಇಲಾಖೆಯ ಆಯುಕ್ತರು | ಪದನಿಮಿತ್ತ ಸದಸ್ಯ |
| ನಿರ್ದೇಶಕರು, ಪಂಚಾಯತ್ ರಾಜ್ ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿ ವಿಷಯದಲ್ಲಿ ವ್ಯವಹರಿಸುತ್ತಿರುವ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ | ಪದನಿಮಿತ್ತ ಸದಸ್ಯ ಕಾರ್ಯದರ್ಶಿ |

ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗವು ಬೆಂಗಳೂರಿನ ಕೇಂದ್ರ ಸ್ಥಾನದಿಂದ ಕಾರ್ಯನಿರ್ವಹಿಸುವುದು. ಆಯೋಗದ ಕಛೇರಿ ಹಾಗೂ ಅಗತ್ಯವಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ನಿಯೋಜನೆಯ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಆಯೋಗದ ಪ್ರಕಾರ್ಯಗಳು ಹಾಗೂ ಜವಾಬ್ದಾರಿಗಳನ್ನು ಈ ಆದೇಶದ ಅನುಬಂಧದಲ್ಲಿರುವಂತೆ ಆಯೋಗವು ನಿರ್ವಹಿಸಲು ಆದೇಶಿಸಿದೆ.

ಸದರಿ ಸಮಿತಿಯು ಆರು **(06)** ತಿಂಗಳೊಳಗಾಗಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

Chetna 13/10/21
**(ಚೇತನ. ಎಂ)**
ಸರ್ಕಾರದ ಅಧೀನ ಕಾರ್ಯದರ್ಶಿ(ಜಿ.ಪಂ.)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.
13/10/21

**ಗೆ,**

**ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ ಹಾಗೂ ನಿರ್ದೇಶಕರು ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಕಳುಹಿಸುತ್ತಾ, ಮೇಲ್ಕಂಡ ಆದೇಶವನ್ನು ಮುಂದಿನ ರಾಜ್ಯ ಪತ್ರದಲ್ಲಿ ಪ್ರಕಟಿಸಿ 100 ಪ್ರತಿಗಳನ್ನು ಸಚಿವಾಲಯದ ಈ ಇಲಾಖೆಗೆ ಒದಗಿಸುವಂತೆ ಕೋರಲಾಗಿದೆ.**

ಇವರಿಗೆ:

1. ಪ್ರಧಾನ ಮಹಾಲೇಖಪಾಲರು (ಜಿ ಅಂಡ್ ಎಸ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ (ಪಿ.ಬಿ.ನಂ.5398) ಬೆಂಗಳೂರು.
2. ಪ್ರಧಾನ ಮಹಾಲೇಖಪಾಲರು (ಇ ಅಂಡ್ ಆರ್ ಎಸ್ ಎ), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ (ಪಿ.ಬಿ.ನಂ.5398) ಬೆಂಗಳೂರು.
3. ಪ್ರಧಾನ ಮಹಾಲೇಖಪಾಲರು (ಎ ಅಂಡ್ ಇ), ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, (ಪಿ.ಬಿ.ನಂ.5329) ಬೆಂಗಳೂರು.

4. ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಮತ್ತು ಶಾಸನ ರಚನೆ ಇಲಾಖೆ, ವಿಧಾನಸೌಧ, ಬೆಂಗಳೂರು.
5. ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ, ವಿಧಾನಸೌಧ, ಬೆಂಗಳೂರು.
6. ಕಾರ್ಯದರ್ಶಿ, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾ ಮಂಡಳಿ,ಕಟ್ಟಡ(ಹಿಂಭಾಗ), 1ನೇ ಮಹಡಿ, ನಂ:8,ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು-52.
7. ಆಯುಕ್ತರು(ಪಂ.ರಾಜ್), ಕರ್ನಾಟಕ ಪಂಚಾಯತ್ ರಾಜ್ ಆಯುಕ್ತಾಲಯ, ಕೆ.ಜಿ.ರಸ್ತೆ, ಬೆಂಗಳೂರು.
8. ರಾಜ್ಯದ ಎಲ್ಲಾ ಪ್ರಾದೇಶಿಕ ಆಯುಕ್ತರುಗಳು.
9. ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು.
10. ರಾಜ್ಯದ ಎಲ್ಲಾ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್.
11. ನಿರ್ದೇಶಕರು, ರಾಜ್ಯ ಹುಜೂರು ಖಜಾನೆ, ಬೆಂಗಳೂರು.
12. ರಾಜ್ಯದ ಎಲ್ಲಾ ಉಪವಿಭಾಗಾಧಿಕಾರಿಗಳು.
13. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ-6), ವಿಧಾನ ಸೌಧ, ಬೆಂಗಳೂರು.
14. ಇಲಾಖಾ ವೆಬ್‌ಸೈಟ್.
15. ಹೆಚ್ಚುವರಿ ಪ್ರತಿ/ಶಾಖಾ ರಕ್ಷಾ ಕಡತ.

ಪ್ರತಿಯನ್ನು:

1. ಸರ್ಕಾರದ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು.
2. ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
3. ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
4. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಆಪ್ತ ಕಾರ್ಯದರ್ಶಿ.
5. ಮಾನ್ಯ ಕಾನೂನು ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ.
6. ಸರ್ಕಾರದ ಜಂಟಿ ಕಾರ್ಯದರ್ಶಿ (ಸಚಿವ ಸಂಪುಟ), ವಿಧಾನಸೌಧ, ಬೆಂಗಳೂರು.
7. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ ಇವರ ಆಪ್ತ ಕಾರ್ಯದರ್ಶಿ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
8. ಸರ್ಕಾರದ ಪ್ರಧಾನ ಕಾರ್ಯದರ್ಶಿ(ಪಂ.ರಾಜ್), ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ ಇವರ ಹಿರಿಯ ಆಪ್ತ ಕಾರ್ಯದರ್ಶಿ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
9. ನಿರ್ದೇಶಕರು(ಪಂ.ರಾಜ್-2), ಗ್ರಾ.ಅ.ಪಂ.ರಾಜ್ ಇಲಾಖೆ ಇವರ ಆಪ್ತ ಸಹಾಯಕ, ಬಹುಮಹಡಿಗಳ ಕಟ್ಟಡ, ಬೆಂಗಳೂರು.

# ಅನುಬಂಧ

## ಸರ್ಕಾರದ ಆದೇಶ ಸಂ:ಗ್ರಾಅಪಂರಾ 319 ಜಿಪಸ 2021, ದಿನಾಂಕ:13-10-2021

### (ಎ) ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗದ ಪ್ರಕಾರ್ಯಗಳು

(i). ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಲಾದ ಸಂಬಂಧಿತ ಅಂಕಿಅಂಶಗಳ ಹಿಂದಿನ ಜನಗಣತಿಯಲ್ಲಿ ಖಚಿತಪಡಿಸಿದ ಜನಸಂಖ್ಯೆಯ ಆಧಾರದ ಮೇಲೆ ಪ್ರತಿಯೊಂದು ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗೆ ಚುನಾಯಿಸಬೇಕಾದ ಒಟ್ಟು ಸದಸ್ಯರ ಸಂಖ್ಯೆಯನ್ನು ನಿಗದಿಪಡಿಸುವುದಕ್ಕಾಗಿ ಶಿಫಾರಸ್ಸುಗಳನ್ನು ಮಾಡುವುದು.

(ii). ಹಿಂದಿನ ಜನಗಣತಿಯಲ್ಲಿ ಪ್ರಕಟಿಸಲಾದ ಸಂಬಂಧಿತ ಜನಗಣತಿ ಅಂಕಿಅಂಶಗಳ ಆಧಾರದ ಮೇಲೆ ಪ್ರತಿಯೊಂದು ಗ್ರಾಮ ಪಂಚಾಯಿತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಜಿಲ್ಲಾ ಪಂಚಾಯತಿ ಪ್ರದೇಸವನ್ನು ಆಯಾ ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಜಿಲ್ಲಾ ಪಂಚಾಯತಿಗೆ ಚುನಾಯಿಸಲು ಅಗತ್ಯವಾದ ಸದಸ್ಯರ ಸಂಖ್ಯೆಯನ್ನು ವಾರ್ಡುಗಳು ಅಥವಾ ಕ್ಷೇತ್ರಗಳನ್ನಾಗಿ ವಿಂಗಡಿಸಲು ಶಿಫಾರಸ್ಸುಗಳನ್ನು ಮಾಡುವುದು;

(iii). ಪ್ರತಿಯೊಂದು ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಜಿಲ್ಲಾ ಪಂಚಾಯತಿಯ ವಾರ್ಡುಗಳು ಅಥವಾ ಕ್ಷೇತ್ರಗಳ ಗಡಿಗಳನ್ನು ನಿರ್ಧರಿಸುವುದಕ್ಕಾಗಿ ಶಿಫಾರಸ್ಸುಗಳನ್ನು ಮಾಡುವುದು;

(iv). ಪ್ರತಿಯೊಂದು ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿ ಅಥವಾ ಜಿಲ್ಲಾ ಪಂಚಾಯತಿಯಲ್ಲಿನ ಪ್ರತಿ ವಾರ್ಡು ಅಥವಾ ಕ್ಷೇತ್ರಗಳ ಜನಸಂಖ್ಯೆಯು, ಕಾರ್ಯಸಾಧುವಾಗುವಷ್ಟರ ಮಟ್ಟಿಗೆ ಸಮನಾಗಿರತಕ್ಕದ್ದೆಂದು ಖಚಿತಪಡಿಸಿಕೊಳ್ಳುವ ದೃಷ್ಟಿಯಿಂದ ಶಿಫಾರಸ್ಸುಗಳನ್ನು ಮಾಡುವುದು;

(v). ಪ್ರತಿಯೊಂದು ಪ್ರಾದೇಶಿಕ ವಾರ್ಡುಗಳು ಅಥವಾ ಚುನಾವಣಾ ಕ್ಷೇತ್ರಗಳು ಕಾರ್ಯಸಾಧುವಾಗುವಷ್ಟರ ಮಟ್ಟಿಗೆ ಭೌಗೋಳಿಕವಾಗಿ ನಿಬಿಡತೆಯ ಪ್ರದೇಶವನ್ನು ಹೊಂದಲು ಶಿಫಾರಸ್ಸುಗಳನ್ನು ಮಾಡುವುದು;ಮತ್ತು

(vi). ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನೆರವೇರಿಸುವುದು. ಪ್ರಕರಣ 308-ಇರ ಅಡಿಯಲ್ಲಿ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಮಾಡುವ ಮೊದಲು ಆಯೋಗವು ಸಾರ್ವಜನಿಕರಿಂದ ಆಕ್ಷೇಪಣೆಗಳನ್ನು ಆಹ್ವಾನಿಸತಕ್ಕದ್ದು ಮತ್ತು ಅಹವಾಲನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡುವುದು.

## (ಬಿ) ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗದ ಅಧಿಕಾರಗಳು:

ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗವು ಅದರ ಸ್ವಂತ ಕಾರ್ಯ ವಿಧಾನವನ್ನು ನಿರ್ಧರಿಸತಕ್ಕದ್ದು ಮತ್ತು ಅದರ ಪ್ರಕಾರ್ಯಗಳ ನೆರವೇರಿಕೆಯಲ್ಲಿ ಈ ಮುಂದಿನ ವಿಷಯಗಳಿಗೆ ಸಂಬಂಧಿಸಿದಂತೆ, ದಾವೆಯ ವಿಚಾರಣೆಯನ್ನು ನಡೆಸುವಾಗ ಸಿವಿಲ್ ಪ್ರಕ್ರಿಯಾ ಸಂಹಿತೆ, 1908ರ (1908 ರ ಕೇಂದ್ರ ಅಧಿನಿಯಮ V) ಅಡಿಯಲ್ಲಿ ಸಿವಿಲ್ ನ್ಯಾಯಾಲಯದ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತಾರೆ, ಎಂದರೆ:-

(i). ಸಾಕ್ಷಿಗಳಿಗೆ ಸಮನ್ಸ್ ಮಾಡುವುದು ಮತ್ತು ಹಾಜರಾತಿಯನ್ನು ಜಾರಿ ಮಾಡುವುದು.

(ii). ಯಾವುದೇ ದಸ್ತಾವೇಜನ್ನು ಹಾಜರುಪಡಿಸಲು ಅಗತ್ಯಪಡಿಸುವುದು, ಮತ್ತು

(iii). ಯಾವುದೇ ಕಛೇರಿಯಿಂದ ಯಾವುದೇ ಸಾರ್ವಜನಿಕ ದಾಖಲೆಯನ್ನು ಅಜ್ಞಾಪಿಸುವುದು.

(2) ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗವು, ತಮ್ಮ ಪರ್ಯಾಲೋಚನೆಯಲ್ಲಿರುವ ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಉಪಯುಕ್ತವಾಗಬಹುದೆಂದು ಅಥವಾ ಸಂಬಂಧಪಡಬಹುದೆಂದು ಅಭಿಪ್ರಾಯಪಡುವಂಥ ಅಂಶಗಳು ಅಥವಾ ವಿಷಯಗಳ ಕುರಿತು ಯಾವುದೇ ಮಾಹಿತಿಯನ್ನು ಒದಗಿಸುವಂತೆ ಯಾರೇ ವ್ಯಕ್ತಿಯನ್ನು ಅಗತ್ಯಪಡಿಸುವ ಅಧಿಕಾರವನ್ನು ಹೊಂದಿರುತ್ತದೆ.

(3) ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯ ಆಯೋಗವು, (1)ನೇ ಉಪ ಪ್ರಕರಣದ (i) (ii) ಮತ್ತು (iii) ಖಂಡಗಳ ಹಾಗೂ (2)ನೇ ಉಪ ಪ್ರಕರಣದ ಮೂಲಕ ತನಗೆ ಪ್ರದತ್ತವಾದ ಯಾವುದೇ ಅಧಿಕಾರಗಳನ್ನು ಚಲಾಯಿಸಲು ತಮ್ಮ ಯಾರೇ ಸದಸ್ಯರನ್ನು ಅಧಿಕೃತಗೊಳಿಸಬಹುದು ಮತ್ತು ಆ ಕುರಿತು ಸೀಮಾ ನಿರ್ಣಯ ಆಯೋಗವು ಅಧಿಕೃತಗೊಳಿಸಿದ ಸದಸ್ಯನು ಯಾವುದೇ ಅಧಿಕಾರಗಳನ್ನು ಚಲಾಯಿಸುವಲ್ಲಿ ಮಾಡಿದ ಯಾವುದೇ ಆದೇಶ ಅಥವಾ ಕೈಗೊಂಡ ಕಾರ್ಯವು ಸಂದರ್ಭಾನುಸಾರವಾಗಿ ಸೀಮಾ ನಿರ್ಣಯ ಆಯೋಗದ ಆದೇಶ ಅಥವಾ ಕಾರ್ಯವೆಂದು ಭಾವಿಸುವುದು.

**************